# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1509

ಸದಸ್ಯರ ಹೆಸರು : ಶ್ರೀ ಡಿ.ಎಸ್.ಅರುಣ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 10.03.2022

ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ಶಿವಮೊಗ್ಗ, ಡಿ.ಜೆ.ಹಳ್ಳಿ, ಕೆ.ಜಿ.ಹಳ್ಳಿ ಮತ್ತು ಮಂಗಳೂರಿನಲ್ಲಿ ನಡೆದ ದುರ್ಘಟನೆಯ ಬಳಿಕ ಸರ್ಕಾರವು ಇನ್ನು ಮುಂದೆ ಇಂತಹ ಘಟನೆ ನಡೆಯದಂತೆ ಕೈಗೊಂಡ ಮುಂಜಾಗ್ರತೆ ಕ್ರಮಗಳಾವುವು; | 1. ರಾಜ್ಯಾದ್ಯಂತ ಮತೀಯವಾಗಿ ಸಾರ್ವಜನಿಕ ಶಾಂತಿಗೆ ಭಂಗ ಉಂಟು ಮಾಡುವ ಕಿಡಿಗೇಡಿಗಳ ವಿರುದ್ಧ ಕಮ್ಯುನಲ್ ಗೂಂಡಾ ಶೀಟ್‌ಗಳನ್ನು ತೆರೆಯಲಾಗುತ್ತಿದೆ.<br>2. ಪೊಲೀಸ್ ಇಲಾಖೆಯ ವತಿಯಿಂದ ಸಾಮಾಜಿಕ ಜಾಲತಾಣಗಳ ಮೇಲೆ ನಿಗಾ ಇರಿಸಿ ಅದರಲ್ಲಿ ಪ್ರಚೋದನಾಕಾರಿ ಪೋಸ್ಟ್‌ಗಳನ್ನು ಭಿತ್ತರಿಸುವವರ ವಿರುದ್ಧ ಪ್ರಕರಣವನ್ನು ದಾಖಲಿಸಲಾಗುತ್ತಿದೆ.<br>3. ಮತೀಯ ಅಂಶವುಳ್ಳ ಪ್ರತಿಯೊಂದು ಸಣ್ಣ ಘಟನೆಯನ್ನು ಗಂಭೀರವಾಗಿ ಪರಿಗಣಿಸಿ ಮುಂಜಾಗ್ರತಾ ಕ್ರಮವಾಗಿ ಎಲ್ಲಾ ಸಮುದಾಯದ ಮುಖಂಡರನ್ನು ಒಟ್ಟುಗೂಡಿಸಿ ನಾಗರಿಕ ಸಮುದಾಯ ಶಾಂತಿ ಸಭೆಗಳನ್ನು ಪೊಲೀಸ್ ಠಾಣಾ ಮಟ್ಟದಲ್ಲಿ ನಡೆಸಲಾಗುತ್ತಿದೆ.<br>4. ಸಮಾಜದಲ್ಲಿ ಶಾಂತಿ ಕದಡುವ ಕೃತ್ಯ ಎಸಗುವವರ ವಿರುದ್ಧ ಸೂಕ್ತ ಕಾನೂನು ಕ್ರಮ ಜರುಗಿಸಿ ಆರೋಪಿಗಳನ್ನು ದಸ್ತಗಿರಿ ಮಾಡಲಾಗುತ್ತಿದೆ.<br>5. ಮುಂಜಾಗ್ರತೆಯಾಗಿ ಮಾಹಿತಿ ಸಂಗ್ರಹಣೆ ಸ್ಥಾಯಿ ಆದೇಶ 1017 ಹಾಗೂ 1032ರ ರೀತ್ಯಾ ಸಮರ್ಪಕ ಬೀಟ್‌ಜಾರಿ ರೌಡಿ ಮತ್ತು ಕಮ್ಯೂನಲ್ ಗೂಂಡಾ ಆಸಾಮಿಗಳ ಮೇಲೆ ನಿಗಾ ಇಡುವುದು.<br>6. ಕಲಂ: 107 ಸಿಆರ್‌ಪಿಸಿ ರೀತ್ಯಾ ಸದರಿ ವ್ಯಕ್ತಿಗಳ ವಿರುದ್ಧ ಪ್ರಕರಣ ದಾಖಲಿಸಲಾಗುತ್ತಿದೆ.<br>7. ಸಾರ್ವಜನಿಕ ಸುರಕ್ಷತಾ ಅಧಿನಿಯಮ-2018ರ ಅಡಿಯಲ್ಲಿ ಸೂಕ್ಷ್ಮ ಪ್ರದೇಶಗಳಲ್ಲಿ ಸಿ.ಸಿ ಕ್ಯಾಮರಾಗಳ ಅಳವಡಿಸುವುದು ಹಾಗೂ ಮುಂತಾದ ಮುಂಜಾಗ್ರತ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>8. ಗುಪ್ತಚರ ಮಾಹಿತಿ ಸಂಗ್ರಹಣೆ ಮತ್ತು ಬೀಟ್ ಸಿಬ್ಬಂದಿಯಿಂದ ಮಾಹಿತಿ ಸಂಗ್ರಹಿಸಿ, ಮೂಲಭೂತವಾದಿ ಗುಂಪುಗಳು ಅಥವಾ ಸಮಾಜ ವಿರೋಧಿ ಅಂಶಗಳ ಮೇಲೆ ನಿಗಾ ಇಡಲಾಗುತ್ತಿದೆ. |

| | | |
|---|---|---|
| ಆ | ಇನ್ನು ಮುಂದೆ ಇಂತಹ ಘಟನೆಗಳು ನಡೆಯದಂತೆ ಸಾರ್ವಜನಿಕರು ನೆಮ್ಮದಿಯಿಂದ ಇರಲು ಕೈಗೊಂಡ ಕ್ರಮಗಳೇನು? | ಮುಂದೆ ಇಂತಹ ಘಟನೆಗಳು ನಡೆಯಂತೆ ಕಾಲಕಾಲಕ್ಕೆ ರೌಡಿ ಅಸಾಮಿಗಳನ್ನು ಪತ್ತೆ ಮಾಡುತ್ತಿದ್ದು, ಅವರ ಮೇಲೆ ನಿಗಾವಹಿಲಾಗುತ್ತಿದೆ.<br><br>ಕಾನೂನು ಸುವ್ಯವಸ್ಥೆಗೆ ಭಂಗ ತರುವಂತಹ ಯಾವುದೇ ವ್ಯಕ್ತಿಗಳ ಮೇಲೆ ನಿರ್ದಾಕ್ಷಣ್ಯವಾಗಿ ಸೂಕ್ತ ಕಾನೂನು ಕ್ರಮಕೈಗೊಳ್ಳಲಾಗುತ್ತಿದೆ ಹಾಗೂ ಸಾರ್ವಜನಿಕರ ಭದ್ರತೆ ಹಾಗೂ ನೆಮ್ಮದಿಗಾಗಿ ಹಗಲು ರಾತ್ರಿ ಗಸ್ತು ಕರ್ತವ್ಯಗಳನ್ನು ಅಧಿಕಾರಿ/ ಸಿಬ್ಬಂದಿಗಳಿಂದ ನಿರ್ವಹಿಸಲಾಗುತ್ತಿದೆ. ಹಾಗೂ ಕಟ್ಟುನಿಟ್ಟಿನ ಸ್ಥಳಗಳಲ್ಲಿ ತೀವ್ರ ನಿಗಾ ವಹಿಸಿ ಬಂದೋಬಸ್ತ್ ಮಾಡಲಾಗುತ್ತಿದೆ. |

ಹೆಚ್‌ಡಿ 103 ಎಸ್‌ಎಸ್‌ಟಿ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು